ಸದನದಲ್ಲಿ ಉತ್ತರಿಸುವ ಪ್ರಶ್ನೆ



ಕರ್ನಾಟಕ ವಿಧಾನ ಪರಿಷತ್ತು

ನೂರ ನಲವತ್ತನೆಯ ಅಧಿವೇಶನ

ಶುಕ್ರವಾರ, ದಿನಾಂಕ : 13 ನೇ ಮಾರ್ಚ್, 2020

ಸಾವಿರಾರು ಕೋಟಿ ಹಣ ಬಳಕೆ ಮಾಡದೆ ಬ್ಯಾಂಕ್‌ಗಳಲ್ಲಿ ಇಟ್ಟಿರುವ ಬಗ್ಗೆ

ಶ್ರೀ ರಘುನಾಥ್‌ರಾವ್ ಮಲ್ಕಾಪೂರೆ(ವಿಧಾನಸಭೆಯಿಂದ ಚುನಾಯಿತರಾದವರು):-

133 (959) ಮಾನ್ಯ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ:-

(ಅ) ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆಯು ವಿವಿಧ ವಿಭಾಗಗಳಲ್ಲಿ ಬಿಡುಗಡೆಯಾಗಿದ್ದ ಅನುದಾನವನ್ನು ಬಳಕೆ ಮಾಡಿಕೊಳ್ಳದೆ ವಿವಿಧ ಬ್ಯಾಂಕ್‌ಗಳಲ್ಲಿ ಠೇವಣಿ ಇಟ್ಟಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; (ವಿವರ ನೀಡುವುದು)

(ಆ) ಬಂದಿದ್ದಲ್ಲಿ, ಯಾವ ಯಾವ ವರ್ಷಗಳಲ್ಲಿ ಎಷ್ಟೆಷ್ಟು ಅನುದಾನವನ್ನು ಯಾವ ಬ್ಯಾಂಕ್‌ಗಳಲ್ಲಿ ಠೇವಣಿ ಇಡಲಾಗಿದೆ ; ಇದರ ಒಟ್ಟು ಮೊತ್ತ ಎಷ್ಟು ; ಯಾವ ಖಾತೆದಾರರ ಹೆಸರಿನಲ್ಲಿ ಠೇವಣಿ ಇಡಲಾಗಿದೆ ; ಈ ರೀತಿ ಠೇವಣಿ ಇಡಲು ಅನುಮತಿ ನೀಡಿದವರು ಯಾರು ; (ಸ್ಪಷ್ಟ ಮಾಹಿತಿ ನೀಡುವುದು)

(ಇ) ಈ ಪ್ರಕರಣ ಬೆಳಕಿಗೆ ಬಂದ ನಂತರ ಸಂಬಂಧಪಟ್ಟ ಅಧಿಕಾರಿ/ನೌಕರರುಗಳ ವಿರುದ್ಧ ಸರ್ಕಾರ ತೆಗೆದುಕೊಂಡ ಕ್ರಮಗಳೇನು ? (ಬ್ಯಾಂಕ್‌ವಾರು, ವರ್ಷವಾರು, ಹಣದ ಮೊತ್ತದೊಂದಿಗೆ ಸಂಪೂರ್ಣ ವಿವರ ನೀಡುವುದು)